# ಮಗುವಾಗಿ ಒಂದು ಹೊಸ ಅಧ್ಯಾಯ

**- ಪೂರ್ಣಿಮಾ ಹೆಗ್ಡೆ**

*******************

ಅದು ಸೆಪ್ಟೆಂಬರ್ ೨೦೧೬ರ ಮಳೆಗಾಲದ ಅಂತ್ಯದ ಸಮಯವಾಗಿತ್ತು. ಆಗ ನಾನು ಭಾರತದ ಅತಿದೊಡ್ಡ ಲಾಭರಹಿತ ಸಂಸ್ಥೆಗಳಲ್ಲಿ ಒಂದಾದ ಅಜೀಂ ಪ್ರೇಮ್ಜೀ ಫೌಂಡೇಶನ್ ಗೆ ಸೇರಿಕೊಂಡೆ. ನನ್ನ ಬದುಕಿಗೆ ಒಂದು ದಿಟ್ಟ ತಿರುವು ನೀಡಿದ ಹೆಜ್ಜೆ ಅದಾಗಿತ್ತು. ನಾನು ಅಸೋಸಿಯೇಟ್ ಶಿಪ್ ಪ್ರೋಗ್ರಾಂನ (ಸಹವರ್ತಿ ಕಾರ್ಯಕ್ರಮ) ಭಾಗವಾಗಿ ಸೇರಿಕೊಂಡೆ. ಆ ಕಾರ್ಯಕ್ರಮದ ಆರಂಭಿಕ ಪ್ರಕ್ರಿಯೆಯು ಒಂದು ವರ್ಷದವರೆಗೆ ಅವಲೋಕನ ಮತ್ತು ಸಹಯೋಗದ ಮೂಲಕ ಸರ್ಕಾರಿ ಶಾಲೆಯನ್ನು ಅರ್ಥಮಾಡಿಕೊಳ್ಳುವುದನ್ನು ಕಡ್ಡಾಯಗೊಳಿಸಿತ್ತು. ಏಕೆಂದರೆ ನಾವು ಸಾರ್ವಜನಿಕ ಶಾಲಾ ವ್ಯವಸ್ಥೆಯೊಂದಿಗೆ ಕೆಲಸ ಮಾಡುತ್ತಾ, ವಿಷಯ ಜ್ಞಾನದ ಜೊತೆಗೆ ದೃಷ್ಟಿಕೋನದ ವಿಷಯದಲ್ಲೂ ಸಹ ಶಿಕ್ಷಕರ ಸಾಮರ್ಥ್ಯವನ್ನು ಹೆಚ್ಚಿನ ಮಟ್ಟದಲ್ಲಿ ಅಭಿವೃದ್ಧಿಪಡಿಸುವುದು ನಮ್ಮ ಗುರಿಯಾಗಿತ್ತು. ಅದೃಷ್ಟವಶಾತ್ ನನ್ನನ್ನು ಅಜೀಂ ಪ್ರೇಮ್ ಜಿ ಶಾಲೆಗೇ ನಿಯೋಜಿಸಲಾಗಿತ್ತು.

ಬೋಧನಾ ಕೌಶಲ್ಯಕ್ಕೆ ವಿಶೇಷವಾದ ವೃತ್ತಿಪರ ತರಬೇತಿಯ ಅಗತ್ಯವಿರುತ್ತದೆ. ಆದರೆ ನನಗೆ ಅಂತಹ ಪರಿಣತಿ ಇರಲಿಲ್ಲ. ಜೊತೆಗೆ ನಾನು ವ್ಯಾಸಂಗ ಮಾಡುತ್ತಿದ್ದಂತಹ ಸಂದರ್ಭದಲ್ಲಿ ಮಾತ್ರ ಪ್ರಾಥಮಿಕ ಶಾಲೆಯನ್ನು ನಾನು ಕಂಡಿದ್ದೆ! ಆರಂಭದಲ್ಲಿ ತನ್ನ ರೋಮಾಂಚನಕಾರಿ ಕಲಿಕೆಯ ವಾತಾವರಣ ಮತ್ತು ಅತ್ಯುನ್ನತ ಶಾಲಾ ಶಿಕ್ಷಣ ಸಂಸ್ಕೃತಿಯಿಂದಾಗಿ ನನಗೆ ಶಾಲೆಯು ಆಕರ್ಷಕವಾಗಿ ಕಂಡಿತು. ನನಗೆ ಸೂಚಿಸಿದಂತೆ ನಾನು ವೀಕ್ಷಕಳಾಗಿ ಉಳಿದು ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯ ಶೈಕ್ಷಣಿಕ ಹಾಗೂ ಆಡಳಿತಾತ್ಮಕ ಪ್ರಕ್ರಿಯೆಯನ್ನು ಅರ್ಥಮಾಡಿಕೊಂಡೆ.

ಹೀಗೆ ಮಾಡುತ್ತಾ ನಾನು ಇರಲು ಬಯಸಿದ ಜಾಗ ಇದುವೇ ಎಂಬ ಅರಿವು ನನಗಾಯಿತು. ಆರಂಭಿಕ ಹಂತದಲ್ಲಿ ಇಂಗ್ಲಿಷ್ ತರಗತಿಗಳನ್ನು ಅವಲೋಕಿಸಿದಾಗ ಮಕ್ಕಳ ಆಸಕ್ತಿಗಳು, ಅವರ ಕಲಿಕಾ ಸಾಮರ್ಥ್ಯ ಮತ್ತು ಒಂದು ವಿದೇಶಿ ಭಾಷೆಯನ್ನು ಕಲಿಸುವಲ್ಲಿ ಶಿಕ್ಷಕರು ಎದುರಿಸುತ್ತಿರುವ ಸವಾಲುಗಳು ನನ್ನ ಗಮನಕ್ಕೆ ಬಂದವು. ಈ ಸಮಯದಲ್ಲೇ ನನಗೆ ಬೋಧನೆಯ ಪ್ರಾಯೋಗಿಕ ಜ್ಞಾನ ದೊರೆತದ್ದು. ಜೊತೆ ಜೊತೆಗೆ ನಲಿ-ಕಲಿ ತರಗತಿಗಳಿಗೂ ನನ್ನ ಸಹಯೋಗವನ್ನು ನಾನು ಪ್ರಾರಂಭಿಸಿದೆ. ಇದಾದ ಅನಂತರವಷ್ಟೇ ನಾನು ನನ್ನನ್ನು ಶಿಕ್ಷಕಿಯಾಗಿ ಮಾನ್ಯಮಾಡಿಕೊಂಡೆ.

ನಾನು ಸ್ವತಂತ್ರವಾಗಿ ಇಂಗ್ಲಿಷ್ ತರಗತಿಗಳನ್ನು ತೆಗೆದುಕೊಳ್ಳಲು ಪ್ರಾರಂಭಿಸಿ ಈಗ ಮೂರು ತಿಂಗಳಾಗಿವೆ. ಆರಂಭದಲ್ಲಿ, ಎಲ್ಲ ಹೊಸ ಶಿಕ್ಷಕರು ನಂಬುವಂತೆ ನಾನೂ ಸಹ 'ಹೆಚ್ಚು ತಿಳಿದುಕೊಂಡಷ್ಟು ಉತ್ತಮ', ಬೋಧನಾ-ಕಲಿಕೆಯ ಪ್ರಕ್ರಿಯೆಯಲ್ಲಿ ಅನುಭವವು ಬಹಳ ಮುಖ್ಯ ಎಂಬ ವಾಸ್ತವವನ್ನು ಅರಿತೆ. ಆರಂಭದಲ್ಲಿ, ತರಗತಿಯನ್ನು ಕ್ರಮವಾಗಿ ನಡೆಸುವುದು ಬಹಳಷ್ಟು ಸಮಯವನ್ನು ತೆಗೆದುಕೊಳ್ಳುತ್ತಿತ್ತು. ಬೋಧನಾ ಪ್ರಕ್ರಿಯೆಗೆ ಮತ್ತು ಚಟುವಟಿಕೆಗಳನ್ನು ಯೋಜಿಸಲು ಸಾಕಷ್ಟು ಸಮಯವಿರಲಿಲ್ಲ. ತರಗತಿಗಳನ್ನು ಸರಾಗವಾಗಿ ನಡೆಸುವಲ್ಲಿನ ನನ್ನ ಅಸಮರ್ಥತೆಯನ್ನು ಕಂಡು ನಾನು ಕೊಂಚ ನಿರುತ್ಸಾಹಗೊಂಡೆ. ಅದು ಇಂಗ್ಲಿಷಿನ ತರಗತಿಯಾಗಿದ್ದರಿಂದ ನಾನು ಹೆಚ್ಚಾಗಿ ಇಂಗ್ಲಿಷಿನಲ್ಲಿ ಮಾತ್ರ ಮಾತನಾಡುತ್ತಿದ್ದೆ. ಇದರಿಂದ ವಿದ್ಯಾರ್ಥಿಗಳು ಆಸಕ್ತಿ ಕಳೆದುಕೊಂಡರು. ಏಕೆಂದರೆ ಅವರಲ್ಲಿ ಅನೇಕರಿಗೆ ತಮ್ಮ ಸುತ್ತ ಏನು ನಡೆಯುತ್ತಿದೆ ಎಂಬುದನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಗಲೇ ಇಲ್ಲ. ಒತ್ತಡದ ಕಾರಣದಿಂದ ನಾನು ಸ್ಥಳೀಯ ಭಾಷೆಯಲ್ಲಿ ಬೋಧಿಸಲು ಆರಂಭಿಸಿದೆ. ಆದರೆ ಇಂಗ್ಲಿಷ್ ಕಲಿಸಲೆಂದು ಒಂದು ಸೂಕ್ತ ವಾತಾವರಣವನ್ನು ಸೃಷ್ಟಿಸುವ ನನ್ನ ಗುರಿಯಿಂದ ಪ್ರತಿಯೊಬ್ಬರು ವಿಚಲಿತರಾದಂತೆ ಕಂಡರು. ಆಸಕ್ತ ಶಿಕ್ಷಕರು ಮಾತ್ರ ಕಲಿಕೆಯನ್ನು ಆಸಕ್ತಿದಾಯಕವಾಗಿಸಬಹುದು ಎಂಬ ಹೇಳಿಕೆಯು ಬಹಳ ಸತ್ಯ. ಆದ್ದರಿಂದ ಸ್ವ-ಪ್ರೇರಣೆಯಿಂದ ಕಲಿಕೆಯ ವಾತಾವರಣವನ್ನು ನಿರ್ಮಿಸಲು ನಿರ್ಧರಿಸಿದೆ.

ಮೊದಲ ಎರಡು ತಿಂಗಳುಗಳು, ಮಕ್ಕಳ ಮೂಲ ಜ್ಞಾನದ (Base Line) ಮೌಲ್ಯಮಾಪನ ಪ್ರಕ್ರಿಯೆ ನಡೆಯಿತು. ಅಂದರೆ, ನನ್ನ ವಿದ್ಯಾರ್ಥಿಗಳ ಕಲಿಕೆಯ ಮಟ್ಟವನ್ನು ಪತ್ತೆ ಮಾಡುವ ಕೆಲಸ ನಡೆಯಿತು. ಇದು ಸರಿಯಾದ ದಾರಿಗೆ ಹಿಂತಿರುಗಿ ಸರಿಯಾದ ಕಲಿಕೆಯ ಹಿನ್ನೆಲೆಯನ್ನು ನಿರ್ಮಿಸಿಕೊಳ್ಳಲು ನನಗೆ ಸಹಾಯ ಮಾಡಿತು.

ಇತರ ಭಾಷೆಗಳಂತೆ ಇಂಗ್ಲಿಷ್ ಕೂಡ ಸಂವಹನದ ಸಾಧನವಾಗಿರುವುದರಿಂದ ನಾವು ಪ್ರಾಥಮಿಕ ಶಾಲೆಗಳಲ್ಲಿ ಇಂಗ್ಲಿಷ್ ಭಾಷೆಯ ಬಗ್ಗೆ ಮಾತನಾಡುವಾಗ, ಅಲ್ಲಿ ಮಕ್ಕಳಿಗೆ ಮಾತನಾಡುವುದು ಮತ್ತು ಸಂವಹನ ಸಾಮರ್ಥ್ಯವನ್ನು ಬೆಳೆಸುವುದು ಗುರಿಯಾಗಿರುತ್ತದೆ. ಆದರೆ ಭಾಷಾ ಕಲಿಕೆಯ ನಾಲ್ಕು ಕೌಶಲ್ಯಗಳಲ್ಲಿ -ಆಲಿಸುವಿಕೆ, ಮಾತನಾಡುವಿಕೆ, ಓದುವಿಕೆ, ಬರೆಯುವಿಕೆ- ಬಹುಶಃ ಅರ್ಥವಾಗದಿದ್ದರೂ ಸಹ ಓದುವುದು ಮಕ್ಕಳಿಗೆ ಸುಲಭವಾಗುತ್ತದೆ. ಆದರೆ ಮಾತನಾಡುವುದು ಅತ್ಯಂತ ಕಷ್ಟಕರವಾಗುತ್ತದೆ ಎಂಬುದನ್ನು ನಾನು ಕಂಡುಕೊಂಡೆ. ಮಕ್ಕಳು ತಾವು ಓದಿದ್ದನ್ನು ಗ್ರಹಿಸುವ ಮತ್ತು ಅರ್ಥಮಾಡಿಕೊಂಡದ್ದನ್ನು ಮಾತನಾಡುವ ಅಸಮರ್ಥತೆಯನ್ನು ಹೊಂದಿರುವುದಕ್ಕೆ ವಿವಿಧ ಕಾರಣಗಳಿರಬಹುದು. ಆದರೆ ನಮ್ಮ ಶಾಲಾ ಮಕ್ಕಳ ವಿಷಯದಲ್ಲಿ ಅವರು ಇಂಗ್ಲಿಷ್ ಪರಿಸರದಲ್ಲಿ ಬೆಳೆಯದೇ ಇರುವುದು ಹಾಗೂ ತರಗತಿಯ ಹೊರಗೆ ಇಂಗ್ಲಿಷ್ ನಲ್ಲಿ ಮಾತನಾಡುವ ಅಭ್ಯಾಸವು ಕಡಮೆ

ಇರುವುದೇ ಸ್ಪಷ್ಟ ಕಾರಣ. ಅಂದರೆ ಅವರು ಕಲಿತದ್ದನ್ನು ಬಳಸಲು ಅವರಿಗಿರುವ ಸ್ಥಳವೆಂದರೆ ಅದು ಶಾಲೆಯೊಂದೇ. ಆದ್ದರಿಂದ ಅವರು ಇಲ್ಲಿರುವಾಗಲೇ ಅವರಿಗೆ ಸಾಕಷ್ಟು ಅಭ್ಯಾಸ ನೀಡಬೇಕಾಗುತ್ತದೆ.

ಇದು ನನ್ನ ಮನಸ್ಸಿನಲ್ಲಿ ಈ ಕೆಳಗಿನ ಪ್ರಶ್ನೆಗಳನ್ನು ಹುಟ್ಟುಹಾಕಿತು:

ಇಂಗ್ಲಿಷ್ ಕಲಿಕೆಯ ವಾತಾವರಣವನ್ನು ಸೃಷ್ಟಿಸಿ, ತರಗತಿಗಳಲ್ಲಿ ವಿದ್ಯಾರ್ಥಿಗಳ ತೊಡಗಿಕೊಳ್ಳುವಿಕೆ ಮತ್ತು ವೈಯಕ್ತಿಕ ಒಳಗೊಳ್ಳುವಿಕೆಯನ್ನು ಹೆಚ್ಚಿಸಲು ಏನು ಮಾಡಬಹುದು?

## ಯಾವ ವಿಧಾನವನ್ನು ಆರಿಸಿಕೊಳ್ಳಬೇಕು?

ವಿಭಿನ್ನ ಆಸಕ್ತಿಗಳು ಮತ್ತು ವಿವಿಧ ಹಂತಗಳ ಮಕ್ಕಳನ್ನು ಹೊಂದಿರುವ ಒಂದು ತರಗತಿಯನ್ನು ಹೇಗೆ ನಾವು ಒಟ್ಟುಗೂಡಿಸುವುದು ಮತ್ತು ವೈಯಕ್ತಿಕ ಸಮನ್ವಯ ಅಭಿವೃದ್ಧಿಯನ್ನು ತರುವುದು ಹೇಗೆ?

ಪ್ರತಿಯೊಬ್ಬ ವಿದ್ಯಾರ್ಥಿಯ ಆಸಕ್ತಿಗೆ ಅನುಗುಣವಾಗಿ ಚಟುವಟಿಕೆಗಳನ್ನು ಒಳಗೊಂಡ ಪಾಠ ಯೋಜನೆಗಳನ್ನು ತಯಾರಿಸುವುದು ಹೇಗೆ?

ಈ ಹಂತದಲ್ಲಿ ತರಗತಿಗಳನ್ನು ಮತ್ತು ಮಕ್ಕಳನ್ನು ಗಮನಿಸಿದ ನನ್ನ ಅನುಭವವು ಭಾಷೆಯು ಮಾತಿನ ರೂಪದಲ್ಲಿ ಹೊರಬರುವ ಮೊದಲು ಮನಸ್ಸಿನ ಒಳಗೆ ಅಚ್ಚಾಗಬೇಕು ಎಂಬ ತೀರ್ಮಾನಕ್ಕೆ ಬರಲು ಕಾರಣವಾಯಿತು. ಶಬ್ದಸಂಪತ್ತನ್ನು ಅಭಿವೃದ್ಧಿಪಡಿಸುವಿಕೆಯ ಈ ಗುರಿಯನ್ನು ಸಾಧಿಸಲು ನನಗೆ ಸಹಾಯ ಮಾಡಬಹುದು. ವಿದೇಶಿ ಭಾಷೆಯನ್ನು ಕಲಿಯುವ ಒಂದು ವಿಧಾನವೆಂದರೆ ಆ ಭಾಷೆಯನ್ನು ಆಲಿಸುವುದು- ಮಕ್ಕಳು ಏನನ್ನು ಆಲಿಸುತ್ತಾರೋ ಅದು ಕಲಿಕೆಯ ಮೂಲಗಳಲ್ಲಿ ಒಂದಾಗಿರುತ್ತದೆ ಎಂಬುದನ್ನು ನಾನು ಒಪ್ಪುತ್ತೇನೆ. ನಾನು ಅವರ ಕಲಿಕೆಯನ್ನು ಆಸಕ್ತಿದಾಯಕವಾಗಿಸಲು ಉತ್ತಮ ಮರ್ಗವನ್ನು ಆಯ್ಕೆ ಮಾಡಲು ಬಯಸುತ್ತೇನೆ ಮತ್ತು ಮಕ್ಕಳ ಎರಡನೇ ಭಾಷೆಯ ಸಾಮರ್ಥ್ಯವನ್ನು ಸಾಧಿಸುವಂತೆ ನೋಡಿಕೊಳ್ಳಲು ನನ್ನ ಕಲಿಕೆಯ ಮೇಲೆ ಅನ್ವೇಷಣೆ ಮತ್ತು ಪ್ರಯೋಗ ಮಾಡಲು ಪ್ರಾರಂಭಿಸಿದೆ.

ಆಲಿಸುವ ಸಾಮರ್ಥ್ಯವನ್ನು ಕೇಂದ್ರೀಕರಿಸಿ ವಿನ್ಯಾಸಗೊಳಿಸಲಾದ ಚಟುವಟಿಕೆಗಳಲ್ಲಿ ಒಂದೆಂದರೆ, ಪ್ರಾಸಬದ್ಧ ಸಣ್ಣ ಶಿಶುಗೀತೆಗಳು. ಯಾವುದೇ ವಯಸ್ಸಿನ ಮಕ್ಕಳು ಪದ್ಯಗಳು ಮತ್ತು ಪ್ರಾಸಬದ್ಧ ಶಿಶುಗೀತೆಗಳನ್ನು ಹಾಡಲು

ಇಷ್ಟಪಡುತ್ತಾರೆ. ಶಬ್ದಸಂಪತ್ತನ್ನು ನಿರ್ಮಿಸುವ ಕಡೆಗಿನ ನನ್ನ ಮೊದಲ ಹೆಜ್ಜೆ ಎಂದರೆ, ಪ್ರಾಸಬದ್ಧ ಶಿಶುಗೀತೆಗಳನ್ನು ಮತ್ತೆ ಮತ್ತೆ ಹಾಡುವುದು. ಇದು ಮಕ್ಕಳಿಗೆ ಭಾಷೆ, ಧ್ವನಿ, ಸ್ವರ ಮತ್ತು ಲಯವನ್ನು ಅನುಭವಿಸಲು ಪ್ರೋತ್ಸಾಹಿಸಿತು. ಪ್ರಾಸಬದ್ಧ ಶಿಶುಗೀತೆಗಳನ್ನು ಚಿತ್ರಗಳು ಮತ್ತು ಚಲನೆಗಳ ಸಂಯೋಜನೆಯೊಂದಿಗೆ ಆಯ್ಕೆ ಮಾಡಲಾಗಿತ್ತು. ಅದು ಪದಗಳು ಮತ್ತು ಅವುಗಳ ಅರ್ಥಗಳ ನಡುವೆ ಸಂರ್ಕವನ್ನು ಸ್ಥಾಪಿಸಲು ಸಹಾಯ ಮಾಡಿದವು. ನಾನು ಅಂತರ್ಜಾಲದ ಮೂಲಕ, ಪಾಠಕ್ಕೆ ಅನುಗುಣವಾಗಿ ಪ್ರಾಸಬದ್ಧ ಶಿಶುಗೀತೆಗಳನ್ನು ಆಯ್ಕೆ ಮಾಡಿಕೊಂಡೆ. ನಾನು ದೇಹದ ಭಾಗಗಳನ್ನು ಕಲಿಸುವ ಸಂರ್ಬ ಬಂದಿತ್ತು. ಆಗ "ಟೂ ಲಿಟಲ್ ಐಸ್ ಟು ಲುಕ್ ಅರೌಂಡ್" (ಸುತ್ತಲೂ ನೋಡಲು ಎರಡು ಪುಟ್ಟ ಕಣ್ಣುಗಳು) ಎಂಬ ಪ್ರಾಸಬದ್ಧ ಶಿಶುಗೀತೆಯನ್ನು ಆಯ್ಕೆ ಮಾಡಿದೆ. ಹಾಗೆಯೇ, "ವಾಟ್ಸ್ ದ ವೆಧರ್ ಲೈಕ್ ಟುಡೆ?" (ಇಂದಿನ ಹವಾಮಾನ ಹೇಗಿದೆ?) ಎಂಬ ಪ್ರಾಸಬದ್ಧ ಶಿಶುಗೀತೆಯು ಬಟ್ಟೆಯ ಕಲ್ಪನೆಯನ್ನು ಹವಾಮಾನದ ಪರಿಕಲ್ಪನೆಯೊಂದಿಗೆ ಜೋಡಿಸಿತು. ಈ ರೀತಿಯಾಗಿ ನನ್ನ ತರಗತಿಗಲ್ಲಿ ಪರಿಕಲ್ಪನೆಗಳನ್ನು ಕಲಿಸಲು ಪ್ರಾಸಬದ್ಧ ಶಿಶುಗೀತೆಗಳು ಒಂದು ಸಾಧನವಾಗಿ ಮಾರ್ಪಟ್ಟಿವೆ. ಈ ಪ್ರಾಸಬದ್ಧ ಶಿಶುಗೀತೆಗಳ ಮೂಲಕ ನಾನು ಮಕ್ಕಳಿಗೆ ನಾಮಪದಗಳು, ಕ್ರಿಯಾಪದಗಳು ಮತ್ತು ವಾಕ್ಯ ರಚನೆಗಳನ್ನು ಅರ್ಥಮಾಡಿಸಲು ಪ್ರಯತ್ನಿಸಿರುವೆ. ಐ ಆಮ್, ಐ ಕ್ಯಾನ್, ಐ ಲೈಕ್ ಎಂಬಂತಹ ಬಳಕೆಗಳನ್ನು ಪ್ರಾಸಬದ್ಧ ಶಿಶುಗೀತೆಗಳ ಮೂಲಕ ಮಾತ್ರ ಮಕ್ಕಳಿಗೆ ಸುಲಭವಾಗಿ ತಿಳಿಸಲು ಸಾಧ್ಯವಾಯಿತು.

ಲಿಟಲ್ ಬರ್ಡ್ ಕ್ಯಾನ್ ಯು ಕ್ಲಾಪ್? (ಪುಟ್ಟ ಹಕ್ಕಿ ನೀನು ಚಪ್ಪಾಳೆ ತಟ್ಟಬಹುದೇ?)

ನೋ ಐ ಕಾಂಟ್, ಕಾಂಟ್ ಕ್ಲಾಪ್. (ಇಲ್ಲ ಇಲ್ಲ ನಾನು ಚಪ್ಪಾಳೆ ತಟ್ಟಲಾರೆ.)

ಲಿಟಲ್ ಬರ್ಡ್ ಕ್ಯಾನ್ ಯು ಫ್ಲೈ? (ಪುಟ್ಟ ಹಕ್ಕಿ ನೀನು ಹಾರಬಲ್ಲೆಯಾ?)

ಎಸ್ ಐ ಕ್ಯಾನ್, ಕ್ಯಾನ್ ಫ್ಲೈ. (ಹೌದು ಹೌದು ನಾನು ಹಾರಬಲ್ಲೆ.)

ನಾನು ಬಳಸಿದ ಮತ್ತೊಂದು ಸಾಧನವೆಂದರೆ ಕಥೆಗಳು. ಅದು ಕೇವಲ ಭಾಷೆಯನ್ನು ಬೋಧಿಸುವಲ್ಲಿ ಮಾತ್ರವಲ್ಲದೆ ಕಲ್ಪನಾಶಕ್ತಿಯನ್ನು ವಿಸ್ತರಿಸುವಲ್ಲಿ ಮತ್ತು ಇತರ ವಿಷಯಗಳಿಗೆ ಸಂಬಂಧಿಸಿದ ಹೊಸ ಪರಿಕಲ್ಪನೆಗಳನ್ನು ಪರಿಚಯಿಸುವಲ್ಲಿ ಸಹ ನನಗೆ ಸಹಾಯ ಮಾಡಿತು. ಮಕ್ಕಳಿಗೆ ಕಥೆಗಳನ್ನು ಹೇಳುವಾಗ ಹೇರಳವಾಗಿ ಆಂಗಿಕ ಭಾಷೆಯನ್ನು ಬಳಸುವುದು ಲಾಭಕರವೆಂದು ಸಾಬೀತಾಗಿದೆ. ನನಗೆ ಸಂಗೀತ ಮತ್ತು ರಂಗಭೂಮಿಯಲ್ಲಿ ಆಸಕ್ತಿ ಇರುವುದರಿಂದ, ಕಥೆಗಳನ್ನು ಪರಿಣಾಮಕಾರಿಯಾಗಿ ಮುಟ್ಟಿಸಲು ಸಹಕಾರಿಯಾಯಿತು. ಪ್ರಾಣಿಗಳು, ವಿಜ್ಞಾನ ಮತ್ತು

ಪರಂಪರೆಗಳನ್ನು ಕುರಿತ ಕಥೆಗಳು ಮಕ್ಕಳ ಗಮನವನ್ನು ಸೆಳೆದವು. ಕಥೆಗಳ ಪಾತ್ರಗಳು ಮತ್ತು ವಸ್ತು-ವಿಷಯದ ಬಗ್ಗೆ ಮಕ್ಕಳು ಸರಳ ವಾಕ್ಯಗಳಲ್ಲಿ ಪ್ರಶ್ನೆಗಳನ್ನು ಕೇಳಿದರು. ಬೇಸಿಗೆ ರಜಾದಿನಗಳಲ್ಲಿ ಕಥೆಗಳನ್ನು ರೂಪಿಸಿದ್ದು, ವಿಶೇಷವಾಗಿ ಶಬ್ದಕೋಶವನ್ನು ನಿರ್ಮಿಸುವಲ್ಲಿ, ಬಹಳ ಸಹಾಯವಾಯಿತು.

ಇದೆಲ್ಲವನ್ನು ಮಾಡಲು ವ್ಯವಸ್ಥಿತವಾದ ಯೋಜನೆ ಬೇಕು. ಪಾಠ ಯೋಜನೆಯ ಪಾತ್ರ ಇಲ್ಲಿ ಬಹಳ ಮುಖ್ಯ ಮತ್ತು ಅದನ್ನು ರ್ಧಮಾಡಿಕೊಳ್ಳಲು ಹೆಚ್ಚಿನ ಶ್ರಮ ಮತ್ತು ಸಮಯ ಬೇಕಾಗುತ್ತದೆ. ವಸ್ತುಗಳನ್ನು ವಿನ್ಯಾಸಗೊಳಿಸುವುದು ಒಂದು ಸವಾಲೇ ಸರಿ. ಕಲಿಸುವ ಕಾರಣಕ್ಕೆಂದು ಬೋಧನಾ-ಕಲಿಕಾ ಸಾಮಗ್ರಿಯನ್ನು (ಟಿಎಲ್ಎಂ- ಟೀಚಿಂಗ್ ಲರ್ನಿಂಗ್ ಮೆಟೀರಿಯಲ್) ವಿನ್ಯಾಸಗೊಳಿಸುವಿಕೆಯು ಬಹಳ ಸವಾಲಿನ ಕೆಲಸ ಎಂಬುದನ್ನು ನಾನು ರ್ಧಮಾಡಿಕೊಂಡೆ. ಇದರೊಂದಿಗೆ, ಭಾಷಾ ತರಗತಿಗಳಲ್ಲಿ ರ್‍ಯಾಯ ಯೋಜನೆಗಳು, ಬೋಧನಾ ಸಾಮಗ್ರಿಗಳು ಮತ್ತು ಭಾಷೆಯ ಮೇಲಿನ ಉತ್ತಮ ಹಿಡಿತ ಸಂಪರ್ಣವಾಗಿ ಮುಖ್ಯವಾಗುತ್ತದೆ. ಸರಿಯಾದ ಇಂಗ್ಲಿಷ್ ಕಲಿಕೆಯ ವಾತಾವರಣವನ್ನು ತರಲು ನಾನು ನನ್ನ ಶಕ್ತಿ ಮೀರಿ ಯೋಚಿಸಬೇಕಾಯಿತು. ಪಾತ್ರಾಭಿನಯ, ಆಟಗಳು, ಅಭಿಪ್ರಾಯ ಬರೆಯುವಿಕೆ ಮತ್ತು ಅಂತಹ ಅನೇಕ ಮೋಜಿನ ಕಾರ್ಯಯೋಜನೆಗಳು ವಿದೇಶಿ ಭಾಷೆಯನ್ನು ಕಲಿಯುವಲ್ಲಿ ಮಕ್ಕಳ ಗಮನವನ್ನು ಸೆಳೆಯಲು ಮತ್ತು ಅವರ ಆಸಕ್ತಿಯನ್ನು ಹೆಚ್ಚಿಸಲು ನನಗೆ ಅನುವು ಮಾಡಿಕೊಟ್ಟವು. ಎರಡನೆಯದಾಗಿ, ಪಾಠದ ಉದ್ದೇಶಗಳನ್ನು ಪೂರೈಸಲು, ವಿಭಿನ್ನ ಆಸಕ್ತಿಯುಳ್ಳ ಗುಂಪುಗಳಿಗಾಗಿ ವಿವಿಧ ಕರ್ಯಹಾಳೆಗಳನ್ನು ಸಿದ್ಧಪಡಿಸಲಾಯಿತು. ತಮ್ಮ ತರಗತಿಯ ಮಟ್ಟವನ್ನು ತಲಪಲು ವಿಫಲರಾದ ಮಕ್ಕಳನ್ನು ಸೆಳೆಯಲು ವಿಶೇಷ ಗಮನ ಹರಿಸಲಾಯಿತು. ಗುಂಪು ಚರ್ಚೆ, ವೀಡಿಯೋ ಸ್ಕ್ರೀನಿಂಗ್, ಚಿತ್ರ ಹೊಂದಿಸುವಿಕೆ (ಪರಿಕಲ್ಪನೆಗೆ ಸಂಬಂಧಿಸಿದಂತೆ) ಮತ್ತು ಶಬ್ದಸಂಪತ್ತಿನ ನಿರ್ಮಾಣದಂತಹ ಚಟುವಟಿಕೆಗಳನ್ನು ಮರುವಿನ್ಯಾಸಗೊಳಿಸಲಾಯಿತು. ಹಿಂದಿನ ಕಷ್ಟಗಳು ಆತ್ಮವಿಶ್ವಾಸಕ್ಕೆ ದಾರಿ ಮಾಡಿಕೊಟ್ಟವು- ನನ್ನ ಉತ್ಸಾಹವು ಫಲ ನೀಡಲಾರಂಭಿಸಿತು.

ಪ್ರಯತ್ನಿಸಿದ ಚಟುವಟಿಕೆಗಳ ಪಟ್ಟಿಗೆ ಕೊನೆ ಇಲ್ಲ. ನಾನು ತರಗತಿಯಲ್ಲಿ ಪ್ರಯತ್ನಿಸಿದ ಕೆಲವೇ ಕೆಲವು ನಿರ್‍ವನಗಳು ಮತ್ತು ಚಟುವಟಿಕೆಗಳನ್ನು ಮಾತ್ರ ಇಲ್ಲಿ ನಮೂದಿಸಲು ಸಾಧ್ಯವಾಗಿದೆ. ಕೆಲವು ಮಕ್ಕಳು ದೊಡ್ಡ ಮಟ್ಟದಲ್ಲಿ ಯಶಸ್ವಿಯಾದರು, ಇತರರು ಸ್ವಲ್ಪ ಕಡಮೆ ಸಾಧಿಸಿದರು. ನಾನು ಸ್ವ-ಅನ್ವೇಷಣೆ ನಡೆಸುತ್ತಿದ್ದೇನೆ ಮತ್ತು ಬೋಧನ-ಕಲಿಕಾ ಪ್ರಕ್ರಿಯೆಯ ಹಲವು ಸಾಧ್ಯತೆಗಳನ್ನು ಕಂಡುಕೊಳ್ಳುತ್ತಿದ್ದೇನೆ ಎಂಬ ಬಗ್ಗೆ ನನಗೆ ಸಂತೋಷವಿದೆ. ನಾನು ಎದುರಿಸಬೇಕಾದ ಸವಾಲುಗಳು ಬಹಳಷ್ಟು ಇದ್ದರೂ, ಕಲಿಕೆಗೆ ಎಂದಿಗೂ ಕೊನೆಯಿಲ್ಲವಾದ್ದರಿಂದ ಮುಂದೆ ಸಾಗಲು ಅವುಗಳನ್ನೆಲ್ಲ ಉತ್ಸಾಹ ಮತ್ತು ನಗುಮುಖದಿಂದಲೇ ಎದುರಿಸುತ್ತೇನೆ. ಆಲ್ಫ್ರೆಡ್ ಟೆನ್ನಿಸನ್ನ ನುಡಿಗಳಾದ

‘ಶ್ರಮಿಸಲು, ಹುಡುಕಲು, ಕಂಡುಕೊಳ್ಳಲು, ಆದರೆ ಗಳಿಸಲು ಅಲ್ಲ’ ಎಂಬುದೇ ಸದ್ಯ ನನ್ನ ಧ್ಯೇಯವಾಕ್ಯವಾಗಿದೆ.

ಪೂರ್ಣಿಮಾ ಅವರು ಅಜೀಂ ಪ್ರೇಮ್ಜಿ ಫೌಂಡೇಶನ್ನಲ್ಲಿ ೨೦೧೬ ರ ಅಸೋಸಿಯೇಟ್ ಬ್ಯಾಚ್ ಗೆ ಸೇರಿದ್ದಾರೆ. ಅಸೋಸಿಯೇಟ್ಸ್ ಕಾರ್ಯಕ್ರಮದ ಭಾಗವಾಗಿ ಅವರು ಪ್ರಸ್ತುತ ಕರ್ನಾಟಕದ ಯಾದಗಿರಿಯ ಅಜೀಂ ಪ್ರೇಮ್ಜಿ ಶಾಲೆಯಲ್ಲಿ ಇಂಗ್ಲಿಷ್ ಬೋಧನೆಯಲ್ಲಿ ಸುಗಮಕಾರರಾಗಿದ್ದಾರೆ.

ಅವರನ್ನು poornima.hegde@azimpremjifoundation.org ಇಮೇಲ್ ಐಡಿಯ ಮೂಲಕ ಸಂಪರ್ಕಿಸಬಹುದು.